CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೧, ೨೦೦೪ (ಆಷಾಢ ೧೦, ಶಕ ವರ್ಷ ೧೯೨೬) | ಸಂಚಿಕೆ ೨೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು-9**

**ಅಧಿಸೂಚನೆ ಸಂಖ್ಯೆ: ಎನ್‌ಆರ್‌ಸಿ(2):18:2004-05, ದಿನಾಂಕ: 11ನೇ ಜೂನ್ 2004**

**ವಿಷಯ:** 2004ನೇ ಸಾಲಿನ ಶೈಕ್ಷಣಿಕ ವರ್ಷಕ್ಕೆ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಸರ್ಕಾರಿ ಸ್ಥಾನಗಳಿಗೆ ಶುಶ್ರೂಷಾ ತರಬೇತಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿ ಆಹ್ವಾನಿಸುವ ಬಗ್ಗೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯು:44:ಎಂಪಿಎಸ್:2003(3), ದಿನಾಂಕ: 3-7-2003ರ ಪ್ರಕಾರ ರಾಜ್ಯದಲ್ಲಿನ ಎಲ್ಲಾ ಖಾಸಗಿ ನರ್ಸಿಂಗ್ ಶಾಲೆಗಳ ಪ್ರವೇಶ ಮಿತಿಯ ಶೇಕಡಾ 10ರಷ್ಟು ಸ್ಥಾನಗಳಿಗೆ 2004ನೇ ಸಾಲಿನ ಶೈಕ್ಷಣಿಕ ವರ್ಷಕ್ಕೆ ಪ್ರವೇಶ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಶುಶ್ರೂಷಾ ತರಬೇತಿಯು 3 ವರ್ಷಗಳಾಗಿದ್ದು, "ಶಿಷ್ಯವೇತನ ರಹಿತ" ವಾಗಿರುತ್ತದೆ. ಹಾಗೂ ಅಭ್ಯರ್ಥಿಗಳು ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ತರಬೇತಿ ಪಡೆಯಬೇಕಾಗಿರುತ್ತದೆ.

1. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

ಎ) ಅಭ್ಯರ್ಥಿಗಳು ಕರ್ನಾಟಕ ರಾಜ್ಯದವರಾಗಿರಬೇಕು.

ಬಿ) ಅಭ್ಯರ್ಥಿಗಳಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ 17 ವರ್ಷ ಪೂರ್ಣಗೊಂಡಿರಬೇಕು ಹಾಗೂ 35 ವರ್ಷಗಳು ಮೀರಿರಬಾರದು.

ಸಿ) ಪದವಿಪೂರ್ವ ಶಿಕ್ಷಣ (ದ್ವಿತೀಯ ಪಿಯುಸಿ ಅಥವಾ ಅದಕ್ಕೆ ತತ್ಸಮಾನವಾದ ಶಿಕ್ಷಣ)ವನ್ನು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು.

ಡಿ) ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರೆಗೆ ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಕನಿಷ್ಠ 7 ವರ್ಷಗಳು ವ್ಯಾಸಂಗ ಮಾಡಿರಬೇಕು. (ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣ ಪತ್ರ ಲಗತ್ತಿಸುವುದು) ಹಾಗೂ 10ನೇ ತರಗತಿ ಅಥವಾ 12ನೇ ತರಗತಿ (ದ್ವಿತೀಯ ಪಿಯುಸಿ) ಯನ್ನು ಕಡ್ಡಾಯವಾಗಿ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು.

ಇ) ಅಭ್ಯರ್ಥಿಯು ಪ್ರಥಮ ಹಾಗೂ ದ್ವಿತೀಯ ಪಿಯುಸಿಯನ್ನು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿರಬೇಕು. ಅಥವಾ ಪೋಷಕರು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಕನಿಷ್ಠ 7 ವರ್ಷಗಳು ವ್ಯಾಸಂಗ ಮಾಡಿರಬೇಕು.

ಈ) ಹೊರನಾಡ ಹಾಗೂ ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅವರಿಗೆ ಕನ್ನಡ ಬರೆಯಲು ಓದಲು ಬರಬೇಕು. ಅವರಿಗೆ ಸರಳ ಕನ್ನಡ ಪರೀಕ್ಷೆ ನಡೆಸಲಾಗುವುದು. ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಮಾತ್ರ ತರಬೇತಿಯ ಆಯ್ಕೆಗೆ ಅರ್ಹರಾಗಿರುತ್ತಾರೆ.

ಉ) ಅಭ್ಯರ್ಥಿಗಳಿಗೆ ವಿವಾಹವಾಗಿದ್ದರೆ ಗಂಡನ ಒಪ್ಪಿಗೆ ಪತ್ರ ಲಗತ್ತಿಸುವುದು.

2. ಅ) ಅಭ್ಯರ್ಥಿಗಳು ಎಸ್‌ಎಸ್‌ಎಲ್‌ಸಿ : ದ್ವಿತೀಯ ಪಿಯುಸಿ : ಜಾತಿ : ಆದಾಯ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

ಆ) ಅಭ್ಯರ್ಥಿಗಳು ಅರ್ಜಿಗಳನ್ನು ಕನ್ನಡದಲ್ಲಿ ಸ್ವಂತ ಬರವಣಿಗೆಯಲ್ಲಿ ಭರ್ತಿ ಮಾಡಿರಬೇಕು.

ಇ) ಅಭ್ಯರ್ಥಿಗಳು ಇತ್ತೀಚಿನ ಭಾವಚಿತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

3. ಅ) ಅರ್ಜಿಗಳನ್ನು ರಾಜ್ಯದ 11 ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ದಿನಾಂಕ: 8-7-04 ರಿಂದ 20-7-04 ರವರೆಗೆ ಕೆಲಸದ ದಿನಗಳಂದು ಬೆಳಿಗ್ಗೆ 10.00 ಘಂಟೆಯಿಂದ ಸಂಜೆ 5.00 ಘಂಟೆಯವರೆಗೆ ಪಡೆಯಬಹುದಾಗಿದೆ.

ಆ) ಅಭ್ಯರ್ಥಿಗಳು ರಾಜ್ಯದ 11 ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಅರ್ಜಿ ಪಡೆದು ದಿನಾಂಕ: 22-7-2004 ರೊಳಗಾಗಿ ಅದೇ ಸಂಸ್ಥೆಗಳಿಗೆ ಸಲ್ಲಿಸತಕ್ಕದ್ದು.

ಇ) ನಿಗದಿತ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ. ಹಾಗೂ ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

ಈ) ಅಭ್ಯರ್ಥಿಗಳನ್ನು ಮೆರಿಟ್ ಮತ್ತು ಮೀಸಲಾತಿಗನುಗುಣವಾಗಿ ಆಯ್ಕೆ ಮಾಡಲಾಗುವುದು.

ಉ) ಅರ್ಜಿ ಫಾರಂಗಳನ್ನು ಒಳಗೊಂಡ ಲಕೋಟೆಯ ಮೇಲೆ 2004ನೇ ಸಾಲಿನ ಸರ್ಕಾರಿ ಕೋಟಾದ ಅಡಿಯಲ್ಲಿ ಶುಶ್ರೂಷಾ ತರಬೇತಿ ಪ್ರವೇಶಕ್ಕಾಗಿ ಅರ್ಜಿ ಎಂದು ದಪ್ಪ ಅಕ್ಷರಗಳಲ್ಲಿ ಬರೆಯತಕ್ಕದ್ದು.

4. ರಾಜ್ಯದ ಎಲ್ಲಾ ಖಾಸಗಿ ನರ್ಸಿಂಗ್ ಶಾಲೆಗಳು ತಮ್ಮ ಪ್ರವೇಶ ಮಿತಿಯ ಶೇಕಡಾ 10ರಷ್ಟು ಸ್ಥಾನಗಳನ್ನು ಸರ್ಕಾರದ ವತಿಯಿಂದ ಭರ್ತಿ ಮಾಡಲು ಕಾಯ್ದಿರಿಸುವುದು.

ಪಿ.ಆರ್. 872 ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ ಬೆಂಗಳೂರು.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡುವಳಿಕೆಗಳು

**ವಿಷಯ:** ಶ್ರೀ ಶೈಲ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀಮತಿ ಭಾರತಮ್ಮ W/o ಕೆ.ಎಂ. ಸಿದ್ದಪ್ಪ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಸಂಘದ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101 ಬಿ ರಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:**
1. ದಾವಾ ಸಂಖ್ಯೆ 125/2002-03 ದಿ 21-6-02.
2. ಅಮಲ್ಜಾರಿ ಪ್ರಕರಣ ಸಂಖ್ಯೆ 1545/2002-03.
3. ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ ಮಾ ಅ/ಡಿವಿಜಿ/ಮಾಪ್ರಪ/1/2003-04 ದಿನಾಂಕ 20-1-04.
4. ಸಂಘದ ಆಡಳಿತ ಮಂಡಳಿ ಸಭೆ ತೀರ್ಮಾನ ದಿ: 12-1-04.

**ಪ್ರಸ್ತಾವನೆ:**

ಶ್ರೀ ಶೈಲ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಸಂಘದ ಸಾಲಗಾರರಾದ ಶ್ರೀಮತಿ ಭಾರತಮ್ಮ W/o ಕೆ.ಎಂ. ಸಿದ್ದಪ್ಪ, ಮನೆ ನಂ. 1724/22 ಚಂದ್ರೋದಯ ಮಿಲ್ ಎದುರು ಪಿ.ಬಿ. ರಸ್ತೆ, ದಾವಣಗೆರೆ ಇವರು ದಾವಣಗೆರೆ ನಗರದ 4ನೇ ವಾರ್ಡ್, 6ನೇ ಡಿವಿಜನ್, ಡಿ.ಸಿ. ಎಂ. ಗೇಟಿನಿಂದ ಅವರಗೆರೆಯವರೆಗೆ ಇರುವ ಮುನ್ಸಿಪಲ್ ಡೊ.ನಂ. 1724/22ರಲ್ಲಿ ಆರ್.ಸಿ.ಸಿ. ಮನೆಯ ಅಳತೆ 15 x 40 ಅಡಿಯ ಸ್ಥಿರಾಸ್ತಿಯನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಆದ್ದರಿಂದ ಸಂಘದವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ 125/2002-03 ದಿ 21-6-02 ರಂದು ಒಟ್ಟು ರೂ. 240162/-ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ 1545/2002-03ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಸಂಘಕ್ಕೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿ:17-1-04 ರಂದು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಸದರಿಯವರ ಆಸ್ತಿಯು ಯಾವ ಬಿಡ್ಡುದಾರರು ಭಾಗವಹಿಸದೇ ಇರುವ ಕಾರಣ ಹರಾಜಾಗದೇ ಸಂಘದ ಸಾಲವು ವಸೂಲಾಗದೇ ಇದ್ದು ತೀರ್ಪು ಬಾಕಿದಾರರಿಗೆ ಹಾನಿಯಾಗುತ್ತಿರುವುದನ್ನು ಪರಿಗಣಿಸಿ, ಸದರಿಯವರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರುಕಟ್ಟೆಯ ಮೌಲ್ಯಕ್ಕೆ ವರ್ಗಾವಣೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಈ ಸ್ಥಿರಾಸ್ತಿಯ ಮಾರುಕಟ್ಟೆಯ ಬೆಲೆಯು ರೂ. 291756/- (ಎರಡು ಲಕ್ಷದ ತೊಂಬತ್ತೊಂದು ಸಾವಿರದ ಐವತ್ತಾರು ಮಾತ್ರ) ಆಗಿರುತ್ತದೆ ಎಂದು ಅಂದಾಜು ಮಾಡಲಾಗಿರುತ್ತದೆ. ಮಾರಾಟಾಧಿಕಾರಿಯವರು ಸಹ ಈ ಬಗ್ಗೆ ಹರಾಜು ನಡುವಳಿಕೆಯಲ್ಲಿ ದಾಖಲಿಸಿ ಮಾರುಕಟ್ಟೆ ಮೌಲ್ಯಕ್ಕೆ ಸದರಿ ಸ್ಥಿರಾಸ್ತಿಯನ್ನು ಸಂಘಕ್ಕೆ ವರ್ಗಾಯಿಸಿ ಕೊಡಬೇಕೆಂದು ನಡುವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ ಈ ಬಗ್ಗೆ ಕಾಯ್ದೆಯನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ದುದಾರರು ಪಾಲುಗೊಳ್ಳದೇ ಇರುವ ಪ್ರಯುಕ್ತ ಹಾಗೂ ಸಂಘವು ಈ ಸ್ಥಿರಾಸ್ತಿಯನ್ನು ಮಾರುಕಟ್ಟೆ ಬೆಲೆಗೆ ಸಾಲದ ತೀರುವಳಿ ಕುರಿತಂತೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಮಾರಾಟಾಧಿಕಾರಿಯವರ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಕರ್ನಾಟಕ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಸಂಘದ ಹೆಸರಿಗೆ ವರ್ಗಾಯಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ**

**ಕ್ರ.ಸಂ. ಎಆರ್ 31/ ಎಬಿಎನ್/ ದಾವಾ/6/2004-05, ದಿನಾಂಕ: 10ನೇ ಮೇ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38 ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: CMW/509/CLM/96 ದಿ:21-03-1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶ್ರೀ ಶೈಲ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿಯಮಿತ ದಾವಣಗೆರೆ ಇದರ ದಾವಾ ಸಂಖ್ಯೆ 125/2002-03 ದಿ:21-06-2002 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ: 1545/2002-03ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀಮತಿ ಭಾರತಮ್ಮ W/o ಕೆ.ಎಂ. ಸಿದ್ದಪ್ಪ, ಮನೆ ನಂ. 1724/22 ಚಂದ್ರೋದಯ ಮಿಲ್ ಎದುರು ಪಿ.ಬಿ. ರಸ್ತೆ, ದಾವಣಗೆರೆ ಇವರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ನಗರದ 4ನೇ ವಾರ್ಡ್, 6ನೇ ಡಿವಿಜನ್, ಡಿ.ಸಿ.ಎಂ. ಗೇಟಿನಿಂದ ಅವರಗೆರೆಯವರೆಗೆ ಇರುವ ಮಧ್ಯದ ಮುನ್ಸಿಪಲ್ ಡೊ.ನಂ. 1724/22 ರಲ್ಲಿರುವ ಆರ್.ಸಿ.ಸಿ. ಮನೆಯ ಅಳತೆ 15 x 40 ಅದರ ಮಾರುಕಟ್ಟೆ ಬೆಲೆಯಾಗಿರುವ ರೂ. 291756/- ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಸಂಘಕ್ಕೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸ್ವತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿರುವ ಮಾರುಕಟ್ಟೆ ಬೆಲೆಗೆ ಉಲ್ಲೇಖದ ಸ್ಥಿರಾಸ್ತಿಯನ್ನು ಸಂಘವು ತನ್ನ ಹೆಸರಿಗೆ ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಸಂಘಕ್ಕೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸ್ವತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿ: 10-5-2004 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿಗಳು,
ದಾವಣಗೆರೆ ಉಪ ವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡುವಳಿಕೆಗಳು**

**ಕ್ರ.ಸಂ. ಎಆರ್ 31/ ಎಬಿಎನ್/ 6/2003-04, ದಿನಾಂಕ: 10ನೇ ಮೇ 2004**

**ನಮೂನೆ-8**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ಬಿ ಪ್ರಕಾರ ಸ್ಥಿರಾಸ್ತಿ ವರ್ಗಾವಣೆ ಮಾಡಲು ಸರ್ಟಿಫಿಕೇಟ್**
**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯಾ)**

ಶ್ರೀ ಶೈಲ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ., ದಾವಣಗೆರೆ ಇದರ ಕಾರ್ಯನಿರ್ವಾಹಕರು ಶ್ರೀಮತಿ ಭಾರತಮ್ಮ ಕೋಂ ಕೆ.ಎಂ. ಸಿದ್ದಪ್ಪ ದಾವಣಗೆರೆ ಇವರಿಂದ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 71 ರಡಿಯಲ್ಲಿ ದಾವಾ ಸಂಖ್ಯೆ: 125/2002-03 ರಲ್ಲಿ ಸದರಿಯವರಿಂದ ಸಂಘಕ್ಕೆ ಆಧಾರ ಮಾಡಿರುವ ಈ ಸರ್ಟಿಫಿಕೇಟ್‌ನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡ್‌ನ್ನು ಪಡೆದಿದ್ದು, ಇದನ್ನು ಜಾರಿಗೊಳಿಸಲು ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 20-8-2003, 20-9-2003, 15-11-2003 ಮತ್ತು 17-1-2004 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ 125/2002-03 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಸಂಘಕ್ಕೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಸಂಘ ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು, ಸ್ಥಿರಾಸ್ತಿಯ ಮಾರುಕಟ್ಟೆ ಮೌಲ್ಯವನ್ನು ಪರಿಗಣಿಸಿ ರೂ.2,91,756/- (ಎರಡು ಲಕ್ಷದ ತೊಂಭತ್ತೊಂದು ಸಾವಿರದ ಏಳುನೂರಾ ಐವತ್ತಾರು ರೂಪಾಯಿ) ಗಳ ಮೊತ್ತಕ್ಕೆ ಸಂಘದ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶ್ರೀ ಶೈಲ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ., ದಾವಣಗೆರೆ ಇವರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ. ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದುಕೊಂಡಿರುವ ಸಾಮ್ಯ ಹಕ್ಕು ಬಾಧ್ಯತೆ | ಮಾರುಕಟ್ಟೆ ಮೌಲ್ಯ | ಸ್ವತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ನಗರದ 4ನೇ ವಾರ್ಡ್, 6ನೇ ಡಿವಿಜನ್, ಡಿ.ಸಿ.ಎಂ. ಗೇಟಿನಿಂದ ಅವರಗೆರೆಯವರೆಗೆ ಇರುವ ಮಧ್ಯದ ಭಾಗ ಡೋರ್ ನಂ. 1724/22 ರಲ್ಲಿರುವ ಆರ್‌ಸಿಸಿ ಮನೆ. | 15 x 40 | ಸ್ವಂತ ಸ್ವಾಧೀನ | 2,91,756/- | 2,91,756/- |

## ಅನುಬಂಧ

## ಷರತ್ತುಗಳು

1. ಸ್ಥಿರಾಸ್ತಿಯ ವರ್ಗಾವಣೆ ಮಾಡಿದ ಒಂದು ವಾರದೊಳಗಾಗಿ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮಾ-ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು ತೀರ್ಪುದಾರರಿಗೆ ಪಾವತಿಸತಕ್ಕದ್ದು.
2. ಸಂಘಕ್ಕೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಸಂಘದ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.
3. ಸಂಘವು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯ ಮಾರಾಟವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸ್ವೀಕರಿಸತಕ್ಕದ್ದು.
5. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
6. ಸ್ಥಿರಾಸ್ತಿಯು ಮಾರಾಟವಾಗುವವರಿಗೆ ಈ ಆಸ್ತಿಯಿಂದ ಸಂಘವು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
7. ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಸಂಘವು ವಹಿಸಿಕೊಳ್ಳತಕ್ಕದ್ದು. ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಈ ಸರ್ಟಿಫಿಕೇಟ್‌ನ್ನು ದಿನಾಂಕ: 10-5-2004 ರಂದು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ಕೊಟ್ಟಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿಗಳು,

ಪಿ.ಆರ್. 888 ದಾವಣಗೆರೆ ಉಪ ವಿಭಾಗ, ದಾವಣಗೆರೆ.

## ತಹಶೀಲ್ದಾರವರ ಕಾರ್ಯಾಲಯ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ

## ನಮೂನೆ - 6

## (ನಿಯಮ - 39)

## ಅಧಿಸೂಚನೆ

1. ಶಿವಮೊಗ್ಗ ತಾಲ್ಲೂಕು, ನಿದಿಗೆ ಹೋಬಳಿ, ಮಾಜಿ ಇನಾಂ ಮತ್ತೂರು ಗ್ರಾಮದಲ್ಲಿ ಕರ್ನಾಟಕ ಉಚ್ಚನ್ಯಾಯಾಲಯದ ರಿಟ್ ಅರ್ಜಿ ನಂ. 17995, 30597 ರಿಂದ 601/2001 (ಕೆ.ಎಲ್.ಆರ್.ಆರ್.ಇ.ಎಸ್) ದಿನಾಂಕ: 02.08.2002 ಆದೇಶ ಮತ್ತು ಕರ್ನಾಟಕ ಸರ್ಕಾರದ ಆದೇಶ ನಂ. ಕಂ.ಇ. - 98 ಭೂ.ದಾ.ಸ. 2001 ದಿನಾಂಕ : 18.09.2002 ರಂತೆ ಮರು ಭೂಮಾಪನ ಮತ್ತು ಹಿಸ್ಸಾ ಸರ್ವೆ ಕಾರ್ಯ ಕೈಗೊಳ್ಳುವ ಕುರಿತು 14-11-2003 ದಿನಾಂಕದಿಂದ ಪ್ರಾರಂಭಿಕ ಹಕ್ಕು ದಾಖಲೆಯನ್ನು ಸಿದ್ದ ಮಾಡುವ ಕೆಲಸವನ್ನು ಕೈಗೊಳ್ಳಲಾಗುವುದೆಂದು ಸಮಸ್ತ ಸಾರ್ವಜನಿಕರ ತಿಳುವಳಿಕೆಗಾಗಿ ಅಧಿಸೂಚಿಸಲಾಗಿದೆ.

2. ಭೂಮಿಯ ಸಂಬಂಧದಲ್ಲಿನ ನ್ಯಾಯಾಲಯ ವ್ಯವಹಾರವನ್ನು ತಡೆಯುವುದು ಮತ್ತು ನ್ಯಾಯಾಲಯದ ಮೂಲಕ ಅದರ ವಿಲೆಗೆ ಅನುಕೂಲ ಮಾಡುವುದು, ದಸ್ತಾವೇಜುಗಳನ್ನು ಬರೆದುಕೊಳ್ಳುವುದರಲ್ಲಿ ಮತ್ತು ನೋಂದಾಯಿಸುವುದರಲ್ಲಿ ರೈತರಿಗಾಗುವ ಅನಾವಶ್ಯಕ ವೆಚ್ಚವನ್ನು ಕಡಿಮೆ ಮಾಡುವುದು ಮತ್ತು ಮೋಸ ಹಾಗೂ ಸುಳ್ಳು ಕ್ಲೇಮುಗಳ ಸ್ಪಷ್ಟನೆಯ ವಿರುದ್ಧವಾಗಿ, ಅವರನ್ನು ರಕ್ಷಿಸುವುದು ದಾಖಲೆಯ ಉದ್ದೇಶವಾಗಿದೆ. ಬೇರೆ ಬೇರೆ ಹಿಸ್ಸೆದಾರರ ಪೈಕಿ ಕಂದಾಯದ ಹೊಣೆಯಷ್ಟೆಂಬುದನ್ನು ಗೊತ್ತುಪಡಿಸುವಲ್ಲಿ ಮತ್ತು ತಕಾವಿ ಮತ್ತು ಭೂ ಅಭಿವೃದ್ಧಿ ಸಾಲಗಳನ್ನು ಮಂಜೂರು ಮಾಡುವಲ್ಲಿ ಮತ್ತು ಭೂ ಕಂದಾಯ ವಸೂಲಿಯನ್ನು ಮುಂದೂಡುವಲ್ಲಿ ಮತ್ತು ಮಾಫಿ ಮಾಡುವಲ್ಲಿ ಇದು ಸರ್ಕಾರ ಹಾಗೂ ರೈತರಿಗೆ ಸಹಾಯಕವಾಗುತ್ತದೆ.

3. ಹಕ್ಕು ದಾಖಲೆಗಳನ್ನು ನಿಷ್ಪಕ್ಷವಾಗಿ ತಯಾರಿಸಲು ಅನುಕೂಲವಾಗುವಂತೆ, ಗ್ರಾಮಲೆಕ್ಕಿಗನು ತನಗೆ ದೊರೆತಿರುವ ಮಾಹಿತಿಯ ಆಧಾರದ ಮೇಲೆ ಸಾಧ್ಯವಾಗುವಷ್ಟು ಚೆನ್ನಾಗಿ ಪ್ರಾರಂಭಿಕ ದಾಖಲೆಯನ್ನು ನಿಯಮಿಸಿದ ನಮೂನೆಯಲ್ಲಿ ಮೊದಲು ತಯಾರಿಸತಕ್ಕುದು ಮತ್ತು ಹಾಗೆ ತಯಾರು ಮಾಡಿದ ಪ್ರತಿಯೊಂದು ಪ್ರಾರಂಭಿಕ ದಾಖಲೆಯನ್ನು ರೆವಿನ್ಯೂ ಇನ್ಸ್‌ಪೆಕ್ಟರು ಅಥವಾ ಇತರ ಅಧಿಕಾರಿಯು ಕ್ರಮವಾಗಿ ತನಿಖೆ ಮಾಡತಕ್ಕುದು. ಅನಂತರ ತಹಶೀಲ್ದಾರ್ ಅಥವಾ ಈ ಉದ್ದೇಶಕ್ಕಾಗಿ ಪ್ರಾಧಿಕೃತನಾದ ಇತರ ಅಧಿಕಾರಿಯು ಪ್ರಾರಂಭಿಕ ದಾಖಲೆಯ ತನಿಖೆ ಮಾಡತಕ್ಕುದು. ಮುಂದಿನ ಹಕ್ಕು ದಾಖಲೆಗೆ ಆಧಾರವಾಗುವ ಈ ದಾಖಲೆಯ ತನಿಖೆ ಮಾಡತಕ್ಕುದು. ಮುಂದಿನ ಹಕ್ಕು ದಾಖಲೆಗೆ ಆಧಾರವಾಗುವ ಈ ದಾಖಲೆಯ ತಯಾರಿಕೆಯು ನಿಷ್ಕೃಷ್ಟವಾಗುವಂತೆ ಮಾಡುವುದಕ್ಕಾಗಿ ಅಧಿಭೋಗದಾರರು ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಇತರ ವ್ಯಕ್ತಿಗಳು ತಮಗೆ ತಿಳಿದಿರುವ ಪ್ರತಿಯೊಂದು ಮಾಹಿತಿಯನ್ನು ತನಿಖೆ ಮಾಡುವ ಅಧಿಕಾರಿಗಳಿಗೆ ಒದಗಿಸತಕ್ಕುದು.

4. ಭೂ ದಾಖಲೆಗಳ ಅಧಿಕಾರಿಗಳು ಹಿಸ್ಸೆಗಳನ್ನು ಅಳತೆ ಮಾಡುವುದಕ್ಕೆ ಮತ್ತು ಜಮೀನಿನಲ್ಲಿರುವ ಹಿಸ್ಸೆಗಳ ನಡುವಣ ವಿವಾದಗ್ರಸ್ಥ ಮೇರೆಯ ರೇಖೆಗಳ ಬಗ್ಗೆ ವಿಚಾರಣೆ ನಡೆಸುವುದಕ್ಕೆ, ನಿಯಮಿಸಿದ ನೋಟೀಸನ್ನು ಕೊಟ್ಟು ಗ್ರಾಮಕ್ಕೆ ಬಂದಾಗ ಅವರಿಗೆ ಸೂಕ್ತವಾದ ಎಲ್ಲಾ ಸಹಾಯವನ್ನು ಮಾಡಬೇಕೆಂದು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಎಲ್ಲಾ ವ್ಯಕ್ತಿಗಳನ್ನು ಅಗತ್ಯಪಡಿಸಲಾಗಿದೆ.

5. ಹಕ್ಕು ದಾಖಲೆಗಳ ಸಂಕಲನದಲ್ಲಿ ಅಥವಾ ಪರಿಷ್ಕರಣದಲ್ಲಿ ನಿರತನಾಗಿರುವ ರೆವಿನ್ಯೂ ಅಧಿಕಾರಿಯ ಕೋರಿಕೆಯ ಮೇರೆಗೆ ಹಕ್ಕು ದಾಖಲೆಗಳ ಸರಿಯಾದ ಸಂಕಲನ ಅಥವಾ ಪರಿಷ್ಕರಣಕ್ಕೆ ಅವಶ್ಯಕವಾದ ಮಾಹಿತಿಯನ್ನು ಮತ್ತು ದಸ್ತಾವೇಜನ್ನು ಅಂಥ ಕೋರಿಕೆಯ ದಿನಾಂಕದಿಂದ ಮೂವತ್ತು ದಿನಗಳೊಳಗೆ ಒದಗಿಸಬೇಕೆಂದು ಅಗತ್ಯಪಡಿಸುವ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 130ನೇ ಪ್ರಕರಣದ ಉಪಬಂಧಗಳ ಕಡೆಗೆ ಸಾರ್ವಜನಿಕರ ಗಮನವನ್ನು ಸೆಳೆಯಲಾಗಿದೆ. ಈ ಕೋರಿಕೆಯನ್ನು ಪೂರೈಸಲು ಮತ್ತು ತಮ್ಮ ಹಕ್ಕುಗಳನ್ನು

ನೋಂದಣಿ ಮಾಡಿಸಿಕೊಳ್ಳಲು ತಪ್ಪಿದರೆ, ಅಧಿಭೋಗದಾರರು ಮತ್ತು ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಹಿಡುವಳಿದಾರರು 25 ರೂಪಾಯಿಗಳಿಗೆ ಮೀರದ ದಂಡಕ್ಕೆ ಗುರಿಯಾಗುತ್ತಾರೆ (ಇದನ್ನು ಭೂ ಕಂದಾಯದ ಬಾಕಿಯೆಂಬಂತೆ ವಸೂಲು ಮಾಡಲಾಗುವುದು) ಕೋರಿಕೆಯ ಮೇರೆಗೆ ಯಾವ ಅಧಿಕಾರಿಗೆ ಯಾವುದೇ ಮಾಹಿತಿಯನ್ನು ಒದಗಿಸಲಾಗಿದೆಯೋ ಅಥವಾ ಯಾವುದೇ ದಸ್ತಾವೇಜನ್ನು ಹಾಜರುಪಡಿಸಲಾಗಿದೆಯೋ ಅಂಥ ಅಧಿಕಾರಿಯು ಅದನ್ನು ಒದಗಿಸುವ ಅಥವಾ ಹಾಜರುಪಡಿಸುವ ವ್ಯಕ್ತಿಗೆ ಅದರ ಬಗ್ಗೆ ನಿಯಮಿಸಿದ ನಮೂನೆಯಲ್ಲಿ ತಲುಪೊಪ್ಪಿಗೆಯನ್ನು ಬರಹದಲ್ಲಿ ಕೊಡತಕ್ಕುದು ಮತ್ತು ದಸ್ತಾವೇಜನ್ನು ಅವನಿಗೆ ಹಿಂದಿರುಗಿಸುವ ಮೊದಲು ಅದರ ಮೇಲೆ ಅದನ್ನು ಹಾಜರುಪಡಿಸಿದ ಸಂಗತಿಯನ್ನು ಮತ್ತು ಆ ದಿನಾಂಕವನ್ನು ಬರೆದು ತನ್ನ ಸಹಿ ಹಾಕತಕ್ಕುದು.

ದಿನಾಂಕ : ತಹಶೀಲ್ದಾರ್,

ಪಿ.ಆರ್. 889 ಶಿವಮೊಗ್ಗ ತಾಲ್ಲೂಕು ಶಿವಮೊಗ್ಗ

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಳ್ಳೇಗಾಲ ರವರ ನ್ಯಾಯಾಲಯ

**ಅಧಿಸೂಚನೆ ಸಂಖ್ಯೆ: ಸಿ3/ಎಫ್.ಓ.ಸಿ/ಆರ್.ಪಿ.ಎಸ್-79/2004-05, ದಿನಾಂಕ: 16ನೇ ಜೂನ್ 2004**

ಈ ಕೆಳಗೆ ವಿವರಿಸಿರುವ ದ್ವಿಚಕ್ರ ಮೋಟಾರು ವಾಹನವನ್ನು ಕೊಳ್ಳೇಗಾಲ ತಾಲ್ಲೂಕಿನ ಹನೂರು ಪೊಲೀಸರು ವಲಯ ಅರಣ್ಯಾಧಿಕಾರಿರವರ ಮೂಲಕ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ಆ ವಾಹನವು ಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದು ಅರಣ್ಯ ಕಾಯ್ದೆ ಸೆಕ್ಷನ್ 86ರ ಉಲ್ಲಂಘನೆಯಾಗಿರುವುದರಿಂದ ಸೆಕ್ಷನ್ 71 (ಎ) ಪ್ರಕಾರ ಅದರ ವಿರುದ್ಧ ವಿಚಾರಣೆಯನ್ನು ನಡೆಸಲಾಗುತ್ತಿದೆ.

**ವಾಹನದ ವಿವರಗಳು**

| ವಾಹನದ ಮಾದರಿ | ರಿಜಿಸ್ಟ್ರೇಷನ್ ಸಂಖ್ಯೆ | ಪೊಲೀಸು ಕ್ರೈಂ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| ಕವಾಸಾಕಿ ಬಜಾಜ್ ದ್ವಿಚಕ್ರ ವಾಹನ | ಕೆಎ-09-ಇ-3640 | 79/2004 | 30ಇ-104250 | 806105548 |

ಸದರಿ ವಾಹನವನ್ನು ಗಂಧದ ಸಮೇತ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸಲಾಗುತ್ತದೆ. ಈ ಬಗ್ಗೆ ಯಾರಿಂದಲಾದರೂ ಆಕ್ಷೇಪಣೆಗಳು ಅಥವಾ ತಕರಾರು ಇದ್ದ ಪಕ್ಷದಲ್ಲಿ ಈ ಅಧಿಸೂಚನೆ ಪ್ರಕಟಗೊಂಡ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಂಬಂಧಿಸಿದ ವಾಹನದ ಮಾಲೀಕತ್ವದ ದಾಖಲೆಗಳೊಂದಿಗೆ ಸಲ್ಲಿಸಬೇಕಾಗಿ ಪ್ರಚುರಪಡಿಸಲಾಗಿದೆ. ನಿಗದಿತ ಅವಧಿಯಲ್ಲಿ ಅದನ್ನು ಸಲ್ಲಿಸದಿದ್ದರೆ ಏಕ ಪಕ್ಷೀಯವಾಗಿ ತೀರ್ಮಾನಿಸಿ ಗಂಧದ ಸಮೇತ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 892 ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಳ್ಳೇಗಾಲ ವಿಭಾಗ, ಕೊಳ್ಳೇಗಾಲ

## ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ

**ಆನಂದರಾವ್ ವೃತ್ತ, ಬೆಂಗಳೂರು - 560 009**

**ಅಧಿಸೂಚನೆ ಸಂಖ್ಯೆ: ಎನ್‌ಆರ್‌ಸಿ(1):13:2004-05, ದಿನಾಂಕ: 17ನೇ ಜೂನ್ 2004**

**ವಿಷಯ:** 2004-05ನೇ ಶೈಕ್ಷಣಿಕ ವರ್ಷದಲ್ಲಿ ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇಲ್ಲಿಗೆ 2 ವರ್ಷಗಳ ಅವಧಿಯ ಪಿ.ಸಿ. ಬಿ.ಎಸ್ಸಿ (ನರ್ಸಿಂಗ್) ವ್ಯಾಸಂಗಕ್ಕೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇವರಲ್ಲಿ 2 ವರ್ಷಗಳ ಪಿಸಿ ಬಿಎಸ್ಸಿ (ನ) ವ್ಯಾಸಂಗಕ್ಕೆ 2004-05ನೇ ಸಾಲಿನ ಶೈಕ್ಷಣಿಕ ವರ್ಷಕ್ಕಾಗಿ ಅರ್ಹ ಇಲಾಖಾ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಕರೆಯಲಾಗಿದೆ. ತರಗತಿಗಳು ದಿನಾಂಕ: 1-9-2004 ರಿಂದ ಆರಂಭವಾಗಲಿದೆ. ವ್ಯಾಸಂಗಕ್ಕೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕೆಳಕಂಡ ಅರ್ಹತೆಯನ್ನು ಹೊಂದಿರತಕ್ಕದ್ದು.

> ಅಭ್ಯರ್ಥಿಗಳು ಜನರಲ್ ನರ್ಸಿಂಗ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

> ನೋಂದಾಯಿತ ದಾದಿಯಾಗಿರತಕ್ಕದ್ದು : ಆರೋಗ್ಯ ಸಂದರ್ಶಕಿಯಾಗಿರತಕ್ಕದ್ದು.

> ಪ್ರೊಬೇಷನರಿ ಪೂರೈಸಿದ್ದಾರೆಂದು ಘೋಷಿಸಿದ್ದು, ಕನಿಷ್ಟ 5 ವರ್ಷಗಳ ಸೇವೆ ಸಲ್ಲಿಸಿರಬೇಕು.

> ಕರ್ನಾಟಕ ರಾಜ್ಯದ ಯಾವುದೇ ವಿಶ್ವವಿದ್ಯಾಲಯದಿಂದ ಅಂಗೀಕೃತವಾದ ಕಲೆ, ವಾಣಿಜ್ಯ ಅಥವಾ ವಿಜ್ಞಾನ ವಿಭಾಗದಲ್ಲಿ ಪಿ.ಯು.ಸಿ. ಅಥವಾ ತತ್ಸಮಾನದ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

> ಒಳ್ಳೆಯ ಸೇವಾವೃತ್ತಿ ಹಾಗೂ ಸೇವಾ ದಾಖಲೆಗಳನ್ನು ಹೊಂದಿರತಕ್ಕದ್ದು.

> 48 ವರ್ಷಗಳ ವಯಸ್ಸನ್ನು ಮೀರಿರಬಾರದು.

ಈ ಹಿಂದೆ ವ್ಯಾಸಂಗಕ್ಕಾಗಿ ನಿಯೋಜಿಸಲ್ಪಟ್ಟಿದ್ದಲ್ಲಿ ಕಡೆಯ ಪಕ್ಷ ಮೂರು ವರ್ಷ ಪೂರೈಸಿರಬೇಕು.

ಸದರಿ ವ್ಯಾಸಂಗಕ್ಕೆ ಅರ್ಜಿಯನ್ನು ಸಲ್ಲಿಸಲು ಇಚ್ಚಿಸುವ ಇಲಾಖಾ ನೌಕರರು ನಿಗದಿತ ಅರ್ಜಿಯನ್ನು ಪ್ರಾಂಶುಪಾಲರ ಕಛೇರಿ, ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು ಇವರಿಂದ ರೂ.100-00 ನಗದು ಪಾವತಿ ಮಾಡಿ ಪಡೆಯಬಹುದಾಗಿದೆ.

ಅಂಚೆ ಮೂಲಕ ಅರ್ಜಿ ಪಡೆಯ ಬಯಸುವವರು ರೂ. 100-00ರ ಹುಂಡಿಯನ್ನು ಪ್ರಾಂಶುಪಾಲರು, ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇವರಿಗೆ ಅಂಚೆ ಚೀಟಿ ಹಚ್ಚಿದ ಸ್ವವಿಳಾಸದ 24 x 12 ಸೆ.ಮಿ. ಲಕೋಟೆಯನ್ನು ಕಳುಹಿಸಿ ಪಡೆಯಬಹುದಾಗಿದೆ.

ಸದರಿ ಅರ್ಜಿ ನಮೂನೆಯನ್ನು ದಿ: 28-6-2004 ರಿಂದ 9-7-2004 ರವರೆಗೆ ಬೆಳಿಗ್ಗೆ 11-00 ಘಂಟೆಯಿಂದ ಮಧ್ಯಾಹ್ನ 4-00 ಘಂಟೆಯವರೆಗೆ ಎಲ್ಲಾ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿದೆ. ಅರ್ಜಿಯೊಂದಿಗೆ ಅಭ್ಯರ್ಥಿಯು ತಮ್ಮ ವಿದ್ಯಾಭ್ಯಾಸದ ಹಾಗೂ ಸೇವಾ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕಾಗಿರುತ್ತದೆ. ಎಲ್ಲಾ ಮಾಹಿತಿಗಳನ್ನೊಳಗೊಂಡ ಅರ್ಜಿಗಳನ್ನು ಮೇಲಾಧಿಕಾರಿಗಳ ಮುಖಾಂತರ ಸದಸ್ಯ

ಕಾರ್ಯದರ್ಶಿಗಳು ಹಾಗೂ ಪ್ರಾಂಶುಪಾಲರು, ಶುಶ್ರೂಷಾ ಮಹಾವಿದ್ಯಾಲಯ, ಕೋಟೆ, ಬೆಂಗಳೂರು ಇವರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕವಾಗಲೀ ದಿನಾಂಕ: 17-7-2004ರ ಸಂಜೆ 4-00 ಘಂಟೆಯೊಳಗಾಗಿ ತಲುಪಿಸತಕ್ಕದ್ದು. ನಿಗದಿತ ವಾಯಿದೆಯನ್ನು ಮೀರಿ ಬರುವ ಅರ್ಜಿಗಳನ್ನು ಯಾವ ಕಾರಣವನ್ನು ನೀಡದೇ ಒಟ್ಟಾರೆ ತಿರಸ್ಕರಿಸಲಾಗುವುದು.

ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ವ್ಯಾಸಂಗಕ್ಕೆ ಅರ್ಹರಾದ ಅರ್ಜಿದಾರರನ್ನು ಮೌಖಿಕ ಪರೀಕ್ಷೆಗೆ ಹಾಜರಾಗುವಂತೆ ತಿಳಿಸಲಾಗುವುದು. ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಆಯ್ಕೆ ಸಮಿತಿಯ ಮುಂದೆ ಎಲ್ಲಾ ಮೂಲ ದಾಖಲಾತಿಗಳೊಂದಿಗೆ ಹಾಜರಾಗತಕ್ಕದ್ದು.

**ಸದರಿ ವ್ಯಾಸಂಗಕ್ಕೆ 46 ಸ್ಥಾನಗಳು ಲಭ್ಯವಿದ್ದು ಅವುಗಳಲ್ಲಿ-**

| | | | |
|---|---|---|---|
| a) | ವಿಶ್ವ ಆರೋಗ್ಯ ಸಂಸ್ಥೆ, ನವದೆಹಲಿ ಇವರು ನಿಯೋಜಿಸಿರುವ ವಿದೇಶಿ ಅರ್ಜಿದಾರರಿಗೆ | - | 5 ಸ್ಥಾನಗಳು |
| b) | ಕರ್ನಾಟಕ ರಾಜ್ಯ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಾಮಾನ್ಯ ಶುಶ್ರೂಷಾ ತರಬೇತಿಯನ್ನು ಹೊಂದಿರುವ ಮಹಿಳಾ ಆರೋಗ್ಯ ಸಂದರ್ಶಕಿಯರಿಗೆ. | - | 4 ಸ್ಥಾನಗಳು |
| c) | ಉಳಿದ ಸ್ಥಾನಗಳನ್ನು ಕರ್ನಾಟಕ ರಾಜ್ಯ ಸರ್ಕಾರದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶುಶ್ರೂಷಕರಿಗೆ- | - | 31 ಸ್ಥಾನಗಳು |
| d) | ಡಾ: ಎಂ.ವಿ. ಶೆಟ್ಟಿ ಮೆಮೋರಿಯಲ್ ಟ್ರಸ್ಟ್ ಮಂಗಳೂರು ಈ ಸಂಸ್ಥೆಗೆ ಸರ್ಕಾರದ ವತಿಯಿಂದ ಆಯ್ಕೆ ಮಾಡುವ ಸ್ಥಾನಗಳು- | - | 6 ಸ್ಥಾನಗಳು |

ಮೇಲ್ಕಂಡ a) ಮತ್ತು b) ಸ್ಥಾನಗಳಿಗೆ ಅಭ್ಯರ್ಥಿಗಳು ಇಲ್ಲವಾಗಿ ಸ್ಥಾನಗಳು ಖಾಲಿ ಬಿದ್ದಲ್ಲಿ ಮೇಲ್ಕಂಡ c) ಅರ್ಜಿದಾರರಿಂದ ಭರ್ತಿ ಮಾಡಲಾಗುವುದು.

ಪಿ.ಆರ್. 894 ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪರವಾಗಿ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಸಾಗರ ಉಪವಿಭಾಗ, ಸಾಗರ ಇವರ ಕಛೇರಿಯ ನಡವಳಿಗಳು

**ವಿಷಯ:** ಅಮಲ್ಜಾರಿ ಪ್ರಕರಣ ಸಂಖ್ಯೆ:254:2001-02 (ದಾವಾ ಸಂಖ್ಯೆ) 55:2000-01ರ ಪ್ರಕರಣದಲ್ಲಿ ಸುಸ್ತಿ ಸಾಲಬಾಕಿ ವಸೂಲಾತಿ ಕುರಿತಂತೆ ಬಹಿರಂಗ ಹರಾಜಿಗೆ ತಂದ ಸ್ಥಿರಾಸ್ತಿಯನ್ನು ಖರೀದಿಸಲು ಬಿಡ್ಡುದಾರರು ಬಾರದ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 101(ಬಿ) ಪ್ರಕಾರ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ**
1. ಮಾರಾಟಾಧಿಕಾರಿಗಳು ಹಾಗೂ ಮೇಲ್ವಿಚಾರಕರು ಪೀಕಾರ್ಡ್ ಬ್ಯಾಂಕ್ ನಿ, ಸೊರಬ ಇವರ ಪ್ರಸ್ತಾವನೆ ಪತ್ರ ಸಂಖ್ಯೆ:15:2003-04, ದಿನಾಂಕ: 31-5-2003.
2. ಈ ಕಛೇರಿಯ ಪತ್ರ ಸಂಖ್ಯೆ:ಸಸಂಸನಿ-25:ಅಮಲ್ಜಾರಿ:ಸಿಆರ್-41:2003-04 ದಿನಾಂಕ: 18-6-2003.
3. ಮಾರಾಟಾಧಿಕಾರಿಗಳು, ಹಾಗೂ ಮೇಲ್ವಿಚಾರಕರು ಪೀಕಾರ್ಡ್ ಬ್ಯಾಂಕ್ ನಿ, ಸೊರಬ ಇವರ ಪ್ರಸ್ತಾವನೆ ಪತ್ರ ಸಂಖ್ಯೆ:125:2004-05 ದಿನಾಂಕ: 24-5-2004.
4. ಅಮಲ್ಜಾರಿ ಪ್ರಕರಣ ಸಂಖ್ಯೆ:254:2001-02 ದಿ:22-10-01.

**ಪ್ರಸ್ತಾವನೆ:**

ಶ್ರೀ ಎ. ಹೆಚ್. ಗೌಸ್‌ಮೊಹಿದ್ದೀನ್ ಬಿನ್ ಅಮೀರ್ ಸಾಬ್, ಅನವಟ್ಟಿ ಸೊರಬ (ತಾ) ಹಾಗೂ ಶ್ರೀಮತಿ ಜರೀನಾ ಬೇಗಂ ಕೋಂ ಗೌಸ್ ಮೊಹಿದ್ದೀನ್ ಮತ್ತು ಶ್ರೀಮತಿ ಸಂಬಿಹಾ ಬೇಗಂ (ಸಾಬಿಹಾ ಬೇಗಂ) ಕೋಂ ಗೌಸ್ ಮೊಹಿದ್ದೀನ್ ಇವರುಗಳು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಸೊರಬ ಇವರಲ್ಲಿ ಕೋಳಿ ಸಾಕಾಣಿಕೆ ಸಲುವಾಗಿ ಸಾಲ ಮಂಜೂರು ಮಾಡಿಸಿಕೊಂಡು ದಿನಾಂಕ: 5-11-98 ರಲ್ಲಿ ರೂ. 495000-00 ಅಡಿಕೆ ಬಾಗಾಯ್ತು ಸಲುವಾಗಿ ಸಾಲ ಮಂಜೂರು ಮಾಡಿಸಿಕೊಂಡು ದಿನಾಂಕ:12-10-99 ರಲ್ಲಿ ರೂ. 57000-00 ಮತ್ತು ಅಡಿಕೆ ಬಾಗಾಯ್ತು ಸಲುವಾಗಿ ಪುನ: ದಿ:18-12-99ರಲ್ಲಿ ರೂ. 60000-00 ಹೀಗೆ ಒಟ್ಟು ರೂ. 612000-00 ಗಳನ್ನು ಸಾಲವಾಗಿ ಪಡೆದಿರುತ್ತಾರೆ. ಸದ್ರಿ ಸಾಲಕ್ಕೆ ಸಂಬಂಧಿಸಿದಂತೆ 17.50, 16.50 ರಂತೆ ಬಡ್ಡಿ ಹಾಗೂ ಇತರೆ ಖರ್ಚುಗಳನ್ನು ಬ್ಯಾಂಕಿಗೆ ಕಾಲಕಾಲಕ್ಕೆ ಸರಿಯಾಗಿ ಮರುಪಾವತಿ ಮಾಡುವುದಾಗಿ ಒಪ್ಪಿ ಸಾಲದ ನಿಯಮಗಳು ಮತ್ತು ಷರತ್ತು ಹಾಗೂ ಕರಾರುಗಳಿಗೆ ಸಹಿ ಮಾಡಿರುತ್ತಾರೆ. ಮತ್ತು ಈ ಸಾಲಕ್ಕೆ ತಮಗೆ ಸೇರಿದ ಸ್ಥಿರಾಸ್ತಿಯಾದ ತಲ್ಲೂರು ಗ್ರಾಮದ ಸರ್ವೆ ನಂಬರ್ 325 ಪಿ. 8 ಎಕರೆ 12 ಗುಂಟೆ ಜಮೀನನ್ನು ಆಧಾರ ಮಾಡಿಕೊಟ್ಟಿರುತ್ತಾರೆ.

ಸಾಲಗಾರರು ತಾವು ಪಡೆದ ಸಾಲವನ್ನು ಸಾಲದ ನಿಯಮಾವಳಿ ಮತ್ತು ಕರಾರು ಪ್ರಕಾರ ನಿಗದಿಪಡಿಸಿದ ಅಸಲು ಕಂತು ಮತ್ತು ಬಡ್ಡಿ ಮೊಬಲಗನ್ನು ಸಾಲ ನೀಡಿದ ಬ್ಯಾಂಕಿಗೆ ಮರುಪಾವತಿ ಮಾಡಿರುವುದಿಲ್ಲ, ಈ ಬಗ್ಗೆ ಬ್ಯಾಂಕಿನವರು ತಗಾದೆ ಮಾಡಿ ತಿಳುವಳಿಕೆ ನೀಡಿದರೂ ಸಹಾ ಸಾಲದ ಮೊಬಲಗು ವಸೂಲು ಆಗದೇ ಇದ್ದ ಪ್ರಯುಕ್ತ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 70ರಡಿಯಲ್ಲಿ ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದಿರುತ್ತಾರೆ. ದಾವಾ ಸಂಖ್ಯೆ:55:00-01 ತೀರ್ಪು ದಿನಾಂಕ: 28-5-2001 ಇರುತ್ತದೆ. ನಂತರದಲ್ಲಿ ಅಮಲ್ಜಾರಿ ಕ್ರಮ ಜರುಗಿಸಲು

ಈ ಕಛೇರಿಯಲ್ಲಿ ಅಮಲ್ಜಾರಿ ಪ್ರಕರಣವನ್ನು ದಾಖಲು ಮಾಡಲಾಗಿದೆ. ಅಮಲ್ಜಾರಿ ಪ್ರಕರಣ ಸಂಖ್ಯೆ 254:2001-02 ದಿ:22-10-2001 ಇರುತ್ತದೆ. ಅಮಲ್ಜಾರಿ ಪ್ರಕರಣವನ್ನು ಮುಂದಿನ ಕಾನೂನು ಕ್ರಮ ಜರುಗಿಸಲು ಸದ್ರಿ ಬ್ಯಾಂಕಿನ ಮೇಲ್ವಿಚಾರಕರಿಗೆ ವಹಿಸಿಕೊಡಲಾಗಿದೆ. ಮೇಲ್ವಿಚಾರಕರು ಹಾಗೂ ಮಾರಾಟಾಧಿಕಾರಿಗಳು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಸೊರಬ ಇವರು ಕಾನೂನು ಕ್ರಮ ಜರುಗಿಸಿ, ಫಾರಂ 2 ಮತ್ತು 6ನ್ನು ಸುಸ್ತಿ ಸಾಲಗಾರರಿಗೆ ಜಾರಿಮಾಡಿ ಸಹಿ ಪಡೆದಿರುತ್ತಾರೆ. ಆದರೂ ಸಹಾ ಸಾಲ ವಸೂಲು ಆಗದೇ ಇರುವುದರಿಂದ, ಸಾಲಗಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿಗೆ ಗುರಿಪಡಿಸಲು, ಫಾರಂ 8 ಮತ್ತು 9ನ್ನು ತಯಾರಿಸಿ, ಹರಾಜು ದಿನಾಂಕ ನಿಗದಿಪಡಿಸಿಕೊಂಡು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಕಡತವನ್ನು ಪರಿಶೀಲಿಸಿ, ಸ್ಥಿರಾಸ್ತಿ ಹರಾಜು ಸಲುವಾಗಿ ಹರಾಜು ದಿನಾಂಕವನ್ನು 19-4-2002ಕ್ಕೆ ನಿಗದಿಪಡಿಸಿ, ಫಾರಂ 8 ಮತ್ತು 9ಗಳಿಗೆ ಸಹಿ ಮಾಡಿಕೊಡಲಾಗಿದೆ. ಫಾರಂ 8 ಮತ್ತು 9ನ್ನು ಡಿಕ್ರಿ ಬಾಕಿದಾರರಿಗೆ ದಿನಾಂಕ: 17-3-2002 ರಂದು ಜಾರಿಮಾಡಿ ಸಹಿ ಪಡೆಯಲಾಗಿದೆ. ದಿ:19-4-2002ರ ಹರಾಜು ಪ್ರಕ್ರಿಯೆ ನಡೆಯುವಾಗ ರೈತ ಸಂಘದವರು ಪ್ರತಿಭಟನೆ ಮಾಡಿರುವುದಾಗಿ ಹಾಗೂ ಡಿಕ್ರಿಬಾಕಿದಾರರು ಹರಾಜು ಪ್ರಕ್ರಿಯೆ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ಇವರಲ್ಲಿ ರಿಟ್ ಅರ್ಜಿ ದಾಖಲಿಸಿ, ತಡೆಯಾಜ್ಞೆ ತಂದಿರುತ್ತಾರೆ. ರಿಟ್ ಅರ್ಜಿ ಸಂಖ್ಯೆ:19508:2002 (ಸಿಎನ್ ಡಿಎಎನ್) ಆಗಿರುತ್ತದೆ. ಆದ್ದರಿಂದ ದಿನಾಂಕ:19-4-02ರ ಹರಾಜನ್ನು ಮುಂದೂಡಲಾಗಿದೆ.

ನಂತರದಲ್ಲಿ ರಿಟ್ ಅರ್ಜಿ ವಿಚಾರಣೆ ನಡೆದು ದಿನಾಂಕ: 5-8-2002ರಂದು ಆದೇಶ ಆಗಿರುತ್ತದೆ. ಸದ್ರಿ ಆದೇಶದಲ್ಲಿ ಡಿಕ್ರಿ ಬಾಕಿದಾರರು ದಾಖಲಿಸಿದ್ದ ರಿಟ್ ಅರ್ಜಿಯನ್ನು ತಿರಸ್ಕರಿಸಿದೆ. ಪ್ರಯುಕ್ತ ಡಿಕ್ರಿದಾರರು ಮತ್ತು ಮಾರಾಟಾಧಿಕಾರಿಗಳು ಈ ಪ್ರಕರಣದಲ್ಲಿ ಪುನಃ ಡಿಕ್ರಿಬಾಕಿದಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿಗೆ ಗುರಿಪಡಿಸಲು ಫಾರಂ 8 ಮತ್ತು 9ಗಳನ್ನು ತಯಾರಿಸಿ ಈ ಕಛೇರಿಗೆ ಸಲ್ಲಿಸಿರುವರು, ಕಡತವನ್ನು ಪರಿಶೀಲಿಸಿ ಡಿಕ್ರಿಬಾಕಿದಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಲು ಹರಾಜು ದಿನಾಂಕವನ್ನು 17-2-2003ಕ್ಕೆ ನಿಗದಿಪಡಿಸಿ ದಿನಾಂಕ:8-1-2003 ರಂದು ಫಾರಂ ನಂ. 8 ಮತ್ತು 9 ಗಳಿಗೆ ಸಹಿ ಮಾಡಿಕೊಡಲಾಗಿದೆ. ಮಾರಾಟಾಧಿಕಾರಿಗಳು ಫಾರಂ 8 ಮತ್ತು 9ಗಳನ್ನು ಡಿಕ್ರಿ ಬಾಕಿದಾರರಿಗೆ ದಿನಾಂಕ: 10.01.2003 ರಂದು ಜಾರಿ ಮಾಡಿ ಸ್ವೀಕೃತಿ ಪಡೆದಿರುತ್ತಾರೆ. ಹಾಗೂ ಸಂಬಂಧಿಸಿದ ಕಛೇರಿಗಳಿಗೆ ಸದರಿ ಜಾರಿ ಮಾಡಿ ಸ್ವೀಕೃತಿ ಪಡೆದಿರುತ್ತಾರೆ. ದಿನಾಂಕ: 17-2-2003 ರಂದು ನಡೆಯಲಿರುವ ಹರಾಜಿಗೆ ಸಂಬಂಧಿಸಿದಂತೆ ದಿ: 15-2-2003 ಮತ್ತು 16-2-2003 ರಂದು ಅನವಟ್ಟಿ ಮಂಡಳ ಪಂಚಾಯಿತಿ ವ್ಯಾಪ್ತಿಯಲ್ಲಿ ಟಾಂ, ಟಾಂ ಹೊಡೆಯಿಸುವುದರ ಮೂಲಕ ಸಾರ್ವಜನಿಕ ಪ್ರಕಟಣೆ ಮಾಡಲಾಗಿದೆ.

ದಿನಾಂಕ: 17-2-2003 ರಂದು ಹರಾಜಿಗೆ ಅನವಟ್ಟಿ ಭಾಗದ ರೈತರು ಭಾಗವಹಿಸಿ ಚಳುವಳಿ ನಡೆಸುವರು, ಎಂದು ತಿಳಿದು ಬಂದ ಪ್ರಯುಕ್ತ ದಿ: 17-2-2003ರ ಬಹಿರಂಗ ಹರಾಜನ್ನು ದಿ:24-2-2003 ರಂದು ಬೆಳಿಗ್ಗೆ 12.00 ಘಂಟೆಗೆ ಅನವಟ್ಟಿ ಮಂಡಳ ಪಂಚಾಯಿತಿ ಕಛೇರಿಯಲ್ಲಿಯೇ ಮುಂದುವರೆಸುವುದಾಗಿ ತಿಳಿಸಿ, ಮುಂದೂಡಲಾಗಿದೆ. ಮುಂದೂಡಿದ ಹರಾಜು ಬಗ್ಗೆ ಡಿಕ್ರಿ ಬಾಕಿದಾರರಿಗೆ ತಿಳಿಸಲಾಗಿದೆ.

ಮುಂದೂಡಿದ ಹರಾಜನ್ನು ದಿ:24-2-2003 ರಂದು ಬೆಳಿಗ್ಗೆ 12.00 ಘಂಟೆಗೆ ಅನವಟ್ಟಿ ಮಂಡಳ ಪಂಚಾಯಿತಿ ಆವರಣದಲ್ಲಿ ನಡೆಸಲಾಗಿದೆ. ಬಿಡ್ಡುದಾರರು ಯಾರೂ ಭಾಗವಹಿಸಿರುವುದಿಲ್ಲ. ಆದರೆ ಈ ಬಗ್ಗೆ ಅರ್ಜಿದಾರರ ಬ್ಯಾಂಕಿನ ಆಡಳಿತ ಮಂಡಳಿ ಸಭೆ ದಿನಾಂಕ: 14-2-2003 ರಂದು ಜರುಗಿದ್ದು, ಸದ್ರಿ ಸಭೆಯ ವಿಷಯ ಸಂಖ್ಯೆ 8(1)ರಲ್ಲಿ ವಿಷಯ ಮಂಡಿಸಿ, ಡಿಕ್ರಿ ಬಾಕಿದಾರರಾದ 1) ಶ್ರೀ ಎ ಹೆಚ್ ಗೌಸ್‌ಮೊಹಿದ್ದೀನ್ ಬಿನ್ ಅಮೀರ್ ಸಾಬ್ (2) ಶ್ರೀಮತಿ ಜರೀನಾ ಬೇಗಂ ಕೋಂ ಗೌಸ್‌ಮೊಹಿದ್ದೀನ್ (3) ಶ್ರೀಮತಿ ಸಂಬಿಹಾ ಬೇಗಂ (ಸಾಬಿಹಾ ಬೇಗಂ) ಕೋಂ ಗೌಸ್ ಮೊಹಿದ್ದೀನ್ ಇವರುಗಳ ಸ್ಥಿರಾಸ್ತಿ ಬಹಿರಂಗ ಹರಾಜು ಸಂಬಂಧದಲ್ಲಿ ದಿ:17-2-2003 ರಂದು ನಡೆಯಲಿರುವ ಹರಾಜಿಗೆ ಬಿಡ್ಡುದಾರರು ಭಾಗವಹಿಸದೇ ಇದ್ದ ಸಂದರ್ಭದಲ್ಲಿ ಸದ್ರಿ ಸ್ಥಿರಾಸ್ತಿಯನ್ನು ಅರ್ಜಿದಾರರ ಬ್ಯಾಂಕಿನ ಹೆಸರಿಗೆ ನಿಲ್ಲಿಸಿ ವರ್ಗಾಯಿಸಿಕೊಳ್ಳಲು ಸರ್ವಾನುಮತದಿಂದ ತೀರ್ಮಾನ ಕೈಗೊಂಡಿರುತ್ತಾರೆ. ಮತ್ತು ಈ ಬಗ್ಗೆ ವ್ಯವಹರಿಸಲು ಬ್ಯಾಂಕಿನ ವ್ಯವಸ್ಥಾಪಕರಿಗೆ ಅಧಿಕಾರ ನೀಡಲಾಗಿದೆ. ಆದ್ದರಿಂದ ಬ್ಯಾಂಕಿನ ವ್ಯವಸ್ಥಾಪಕರು ಹರಾಜು ದಿನಾಂಕದಂದು ಹರಾಜು ಪ್ರಕ್ರಿಯೆಯಲ್ಲಿ ಭಾಗವಹಿಸಿ, ಮಾರಾಟಾಧಿಕಾರಿಗಳಿಗೆ ದಿನಾಂಕ: 14-2-2003 ರಂದು ನಡೆದ ಬ್ಯಾಂಕಿನ ಆಡಳಿತ ಮಂಡಳಿ ಸಭೆ ವಿಷಯ ಸಂಖ್ಯೆ 8(1)ರ ತೀರ್ಮಾನದ ಪ್ರತಿಯನ್ನು ನೀಡಿ, ಈ ಪ್ರಕರಣದ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ನಿಲ್ಲಿಸಲು ವಿನಂತಿಸಿಕೊಂಡಿರುತ್ತಾರೆ. ಡಿಕ್ರಿದಾರರ ವಿನಂತಿಯ ಮೇರೆಗೆ ಮತ್ತು 14-2-2003ರ ಆಡಳಿತ ಮಂಡಳಿಯ ಸಭೆಯ ತೀರ್ಮಾನದ ಪ್ರಕಾರ ಮಾರಾಟಾಧಿಕಾರಿಗಳು, ಡಿಕ್ರಿಬಾಕಿದಾರರ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ನಿಲ್ಲಿಸಿ, ಹರಾಜು ನಡವಳಿಕೆಯನ್ನು ಪೂರ್ಣಗೊಳಿಸಿ ಸಹಿ ಮಾಡಿರುತ್ತಾರೆ. ಇದಕ್ಕೆ 9 ಜನ ಸಾಕ್ಷಿಗಳ ಸಹಿ ಪಡೆಯಲಾಗಿದೆ.

ನಂತರದಲ್ಲಿ ಮಾರಾಟಾಧಿಕಾರಿಗಳು ಡಿಕ್ರಿ ಬಾಕಿದಾರರಿಗೆ ಹರಾಜು ಪ್ರಕ್ರಿಯೆ ಮುಗಿದ ನಂತರ ಪುನಃ ಒಂದು ತಿಂಗಳ ಅವಧಿ ನೀಡಿ ಸಾಲದ ಮೊಬಲಗನ್ನು ಬ್ಯಾಂಕಿಗೆ ಜಮಾ ಮಾಡಿ ತಮ್ಮ ಸ್ಥಿರಾಸ್ತಿಯನ್ನು ಉಳಿಸಿಕೊಳ್ಳಲು ಅವಕಾಶ ಇದೆ ಎಂದು ಸಹಾ ತಿಳುವಳಿಕೆ ನೀಡಿರುತ್ತಾರೆ. ಆದರೂ ಸಹಾ ಡಿಕ್ರಿ ಬಾಕಿದಾರರು, ಡಿಕ್ರಿ ಮೊಬಲಗನ್ನು ಪಾವತಿಸದೇ ಇದ್ದ ಪ್ರಯುಕ್ತ ಮಾರಾಟಾಧಿಕಾರಿಗಳು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 101(ಬಿ) ಪ್ರಕಾರ ಪ್ರಸ್ತಾವನೆ ತಯಾರಿಸಿ ವರ್ಗಾವಣೆ ಆದೇಶ ನೀಡಲು ಅಮಲ್ಜಾರಿ ಕಡತವನ್ನು ಈ ಕಛೇರಿಗೆ ಉಲ್ಲೇಖ (1)ರ ಪತ್ರದ ಮೂಲಕ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಉಲ್ಲೇಖ (2)ರ ಈ ಕಛೇರಿಯ ಪತ್ರದ ಮೂಲಕ ನ್ಯೂನತೆ ಸರಿಪಡಿಸಲು ತಿಳಿಸಿದೆ. ಉಲ್ಲೇಖ (3)ರ ಪತ್ರದ ಮೂಲಕ ನ್ಯೂನತೆ ಸರಿಪಡಿಸಿ, ಅಮಲ್ಜಾರಿ ಕಡತವನ್ನು ವಾಪಸ್ಸು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಕಡತವನ್ನು ಪರಿಶೀಲಿಸಿದೆ. ವಿಶೇಷ ಕರ್ತವ್ಯಾಧಿಕಾರಿಗಳು, ಸಹಕಾರ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರು ನೀಡಿರುವ ನಿರ್ದೇಶನ ಪತ್ರ ಸಂಖ್ಯೆ ಸಿಎಂಡಬ್ಲ್ಯೂ:391:ಸಿಆರ್‌ಸಿ:2003 ದಿ:22-8-2003ರ ಪೂರ್ವದಲ್ಲಿ ಈ ಅಮಲ್ಜಾರಿ ಕ್ರಮ ಜರುಗಿರುವುದರಿಂದ ಮೇಲಿನ ನಿರ್ದೇಶನ ಅನ್ವಯಿಸುವುದಿಲ್ಲವೆಂದು ಪರಿಗಣಿಸಿ, ಮಾರಾಟಾಧಿಕಾರಿಗಳ ನಡವಳಿಕೆ ಮತ್ತು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಸೊರಬ ಇದರ ಆಡಳಿತ ಮಂಡಳಿ ಸಭೆ ದಿನಾಂಕ: 14-2-2003ರ ವಿಷಯ ಸಂಖ್ಯೆ 8(1)ರ ತೀರ್ಮಾನದ ಮೇರೆಗೆ ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

**ಕ್ರ.ಸಂ : ಸಸಂಸನಿ 25:ಅಮಲ್ಜಾರಿ:ಕುಂ.101(ಬಿ):ಸಿಆರ್-19:2004-05, ದಿನಾಂಕ: 7ನೇ ಜೂನ್ 2004**

ಬಿ.ವಿ. ಬಸವರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 101(ಬಿ) ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಂ:2001 ಬೆಂಗಳೂರು ದಿನಾಂಕ:21-11-2001ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ. ಹೆಚ್. ಗೌಸ್‌ಮೊಹಿದ್ದೀನ್ ಬಿನ್ ಅಮೀರ್ ಸಾಬ್ (2) ಶ್ರೀಮತಿ ಜರೀನಾ ಬೇಗಂ ಕೋಂ ಗೌಸ್‌ಮೊಹಿದ್ದೀನ್ (3) ಶ್ರೀಮತಿ ಸಂಬಿಹಾ ಬೇಗಂ (ಸಾಬಿಹಾ ಬೇಗಂ) ಕೋಂ ಗೌಸ್‌ಮೊಹಿದ್ದೀನ್, ಅನವಟ್ಟಿ, ಸೊರಬ ತಾಲ್ಲೂಕು ಇವರುಗಳು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಸೊರಬ ಇವರಲ್ಲಿ ಪಡೆದ ಸಾಲಕ್ಕೆ ಸಂಬಂಧಿಸಿದಂತೆ ದಾವಾ ಸಂಖ್ಯೆ 55:2000-01ರ ಪ್ರಕರಣದ ಅಮಲ್ಜಾರಿ ಸಂಖ್ಯೆ 254:2001-02 ಪ್ರಕರಣದಲ್ಲಿ ಬರಬೇಕಾದ ಬಾಬ್ತು ದಿ:31-8-01ಕ್ಕೆ ಇದ್ದಂತೆ ಅಸಲು, ಬಡ್ಡಿ ಇತರೆ ಖರ್ಚು ಸೇರಿ ರೂ. 760675-00 ಮತ್ತು ಮುಂದಿನ ಬಡ್ಡಿ ವಸೂಲಾತಿ ಸಂಬಂಧಲ್ಲಿ ಸದರಿ ಮೊಬಲಗು ವಸೂಲು ಆಗದ ಪ್ರಯುಕ್ತ ಈ ಆದೇಶಕ್ಕೆ ಲಗತ್ತಿಸಿರುವ ನಮೂನೆ-8ರಲ್ಲಿ ತಿಳಿಸಿರುವ ಸ್ಥಿರಾಸ್ತಿಗಳನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಸೊರಬ, ಸೊರಬ (ತಾ), ಶಿವಮೊಗ ಜಿಲ್ಲೆ ಇವರ ಹೆಸರಿಗೆ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ. ಕಾಯ್ದೆಯನ್ವಯ ನಮೂನೆ-8ನ್ನು ಭರ್ತಿ ಮಾಡಿ ಈ ಆದೇಶಕ್ಕೆ ಲಗತ್ತಿಸಿದೆ.

ನನ್ನ ಸಹಿ ಮತ್ತು ಕಛೇರಿಯ ದುಂಡು ಮುದ್ರೆಯೊಂದಿಗೆ ದಿ:7-6-2004ರಂದು ಈ ಆದೇಶ ನೀಡಿದೆ.

**ಬಿ.ವಿ. ಬಸವರಾಜು**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ.

## ನಮೂನೆ - 8

**(ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38(ಎ) ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 101(ಬಿ) ಮೇರೆಗೆ ಸ್ಥಿರಾಸ್ತಿಯ ಪರಭಾರೆ (ವರ್ಗಾಯಿಸುವ) ಪ್ರಮಾಣಪತ್ರ (ಸರ್ಟಿಫಿಕೇಟ್)**

ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ), ಸೊರಬ ಈ ಬ್ಯಾಂಕಿನ ವ್ಯವಸ್ಥಾಪಕರು ಇವರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ. 70ರಡಿ ದಾಖಲಿಸಿರುವ ದಾವಾ ಸಂಖ್ಯೆ:55:2000-01 ತೀರ್ಪು ದಿನಾಂಕ: 28-5-2001 ಹಾಗೂ ಇದಕ್ಕೆ ಸಂಬಂಧಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ 254:2001-02 ದಿನಾಂಕ: 22.10.2001 ರನ್ವಯ ಡಿಕ್ರಿ ಬಾಕಿದಾರರಾದ (1) ಶ್ರೀ ಎ.ಹೆಚ್. ಗೌಸ್‌ಮೊಹಿದ್ದೀನ್ ಬಿನ್ ಅಮೀರ್ ಸಾಬ್ (2) ಶ್ರೀಮತಿ ಜರೀನಾ ಬೇಗಂ ಕೋಂ ಗೌಸ್ ಮೊಹಿದ್ದೀನ್ (3) ಶ್ರೀಮತಿ ಸಂಬೀಹಾ ಬೇಗಂ ಕೋಂ ಗೌಸ್ ಮೊಹಿದ್ದೀನ್ ಇವರುಗಳು ಅರ್ಜಿದಾರರ ಬ್ಯಾಂಕಿಗೆ ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಯ ಮಾರಾಟದ ಬಗ್ಗೆ ದಿನಾಂಕ: 8-1-2003 ರಂದು ಹರಾಜು ಇಸ್ತಿಹಾರ್ ಪ್ರಕಟಿಸಿ, ದಿನಾಂಕ: 17-2-2003 ರಂದು ಹರಾಜು ನಿಗದಿಪಡಿಸಿದೆ. ಬಿಡ್ಡುದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಹರಾಜನ್ನು ದಿ:24-2-2003ಕ್ಕೆ ಮುಂದೂಡಿದೆ. ಹಾಗೂ ಈ ಬಗ್ಗೆ ನಮೂನೆ - 8 ಮತ್ತು 9ನ್ನು ಹೊರಡಿಸಿದೆ.

ಸದರಿ ಹರಾಜು ದಿನಾಂಕದಂದು ಸದ್ರಿ ಸ್ಥಿರಾಸ್ತಿಗಳನ್ನು ಕೊಂಡುಕೊಳ್ಳುವವರು ಯಾರೂ ಇಲ್ಲದಿದ್ದರಿಂದ ಸದರಿ ಸ್ಥಿರಾಸ್ತಿಗಳನ್ನು ಮಾರಾಟ ಮಾಡಲಾಗಲಿಲ್ಲವೆಂಬುದಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಆದ ನಾನು ನನಗೆ ಮನವರಿಕೆಯಾದ ಕಾರಣದಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ. 101(ಬಿ) ಅನ್ವಯ ಮೇಲ್ಕಂಡ ದಾವಾ ಪ್ರಕರಣದ ಆಸ್ತಿಯಲ್ಲಿನ ಸಾಲಗಾರರ (ಡಿಕ್ರಿಬಾಕಿದಾರರ) ಹಕ್ಕು ಸ್ವಾಮ್ಯ ಮತ್ತು ಬಾಧ್ಯತೆಗಳನ್ನು ಬ್ಯಾಂಕಿಗೆ ವಹಿಸಿಕೊಡತಕ್ಕದ್ದು, ಮತ್ತು ಇದಕ್ಕೆ ಲಗತ್ತಿಸಲಾದ ಅನುಸೂಚಿಯಲ್ಲಿ ಕೊಡಲಾದ ಷರತ್ತುಗಳಿಗೆ ಮತ್ತು ಕರಾರುಗಳಿಗೆ ಒಳಪಟ್ಟಿರುವುದೆಂದು ಆದೇಶ ಮಾಡಲಾಗಿದೆ.

### ಆಸ್ತಿಯ ವಿವರ

ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಅನವಟ್ಟಿ ಹೋಬಳಿ, ತಲ್ಲೂರು ಗ್ರಾಮದ ಸರ್ವೆ ನಂ.325 'ಪಿ' ರಲ್ಲಿರುವ 8 ಎಕರೆ 12 ಗುಂಟೆ ವಿಸ್ತೀರ್ಣದ ಖುಷ್ಕಿ ಜಮೀನು ಹಾಗೂ ಇದರಲ್ಲಿ ಇರುವ ಅಡಿಕೆ ಹಾಗೂ ತೆಂಗು ಮತ್ತು ಪಂಪ್‌ಸೆಟ್ ಸಹಿತ.

**ಷರತ್ತುಗಳು:-**

1) ಸಾಲಗಾರರಿಂದ ಅಥವಾ ಡಿಕ್ರಿ ಬಾಕಿದಾರರಿಂದ ಬ್ಯಾಂಕಿಗೆ ಸ್ಥಿರಾಸ್ತಿ ಮಾರಾಟ ದಿನಾಂಕಕ್ಕೆ ಬರಬೇಕಾದ ಒಟ್ಟು ಬಾಕಿ ರೂ. 760675-00-1 ಬಡ್ಡಿ-1 ಇತರೆ ಖರ್ಚುಗಳಿಗೆ ಸೀಮಿತವಾಗಿ ಸ್ಥಿರ ಸ್ವತ್ತಿನ ಮೌಲ್ಯವನ್ನು ಅಂದಾಜು ನಿರ್ಣಯಿಸಲಾಗಿ ಡಿಕ್ರಿ ಹೊಂದಿದ ಬ್ಯಾಂಕಿನ ಹೆಸರಿಗೆ ಸ್ಥಿರ ಸ್ವತ್ತನ್ನು ಪರಭಾರೆ (ವರ್ಗಾವಣೆ) ಮಾಡಿದೆ.
2) ಡಿಕ್ರಿ ಬಾಕಿದಾರರು, ಡಿಕ್ರಿ ಪಡೆದ ಬ್ಯಾಂಕಿಗೆ ಕೊಡಬೇಕಾದ ಬಾಕಿ ಹಣವನ್ನು ಖರ್ಚುಸಹಿತ ಮರುಪಾವತಿ ಮಾಡಿದಲ್ಲಿ ಯಾವುದೇ ಸಂದರ್ಭದಲ್ಲಿಯೂ ಸಹಾ ಸ್ಥಿರ ಸ್ವತ್ತಿನ ಮೂಲ ಖಾತೆದಾರರಿಗೆ ಸದರಿ ಸ್ಥಿರ ಸ್ವತ್ತನ್ನು ವಾಪಸ್ಸು ಮಾಡುವ ಅಧಿಕಾರ:ಪೂರ್ಣ ಹಕ್ಕನ್ನು ಕಾಯ್ದಿರಿಸಿದೆ.

ನನ್ನ ಸಹಿ ಮತ್ತು ಕಚೇರಿಯ ದಂಡು ಮುದ್ರೆಯೊಂದಿಗೆ ದಿನಾಂಕ: 07-6-2004 ರಂದು ಈ ಆದೇಶವನ್ನು ಹೊರಡಿಸಿದೆ.

**ಬಿ.ವಿ. ಬಸವರಾಜು**

ಪಿ.ಆರ್. 895

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ.